ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ 19ನೇ ಜುಲೈ, 2019

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಅನಧಿಕೃತ ಕಲ್ಯಾಣ ಮಂಟಪಗಳ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

354 (562) ಮಾನ್ಯ ಉಪ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕನ್‌ವೆನ್ಷನ್ ಹಾಲ್‌ಗಳೂ ಸೇರಿದಂತೆ ಒಟ್ಟು ಎಷ್ಟು ಖಾಸಗಿ ಕಲ್ಯಾಣ ಮಂಟಪಗಳಿವೆ ; ಈ ಪೈಕಿ ಅಧಿಕೃತ ಮತ್ತು ಅನಧಿಕೃತ ಕಲ್ಯಾಣ ಮಂಟಪಗಳೆಷ್ಟು ; (ವಿಧಾನಸಭಾ ಕ್ಷೇತ್ರವಾರು ವಿವರ ನೀಡುವುದು)

(ಆ) ಈ ಕಲ್ಯಾಣ ಮಂಟಪಗಳು ದಿನವೊಂದಕ್ಕೆ ವಿಧಿಸುತ್ತಿರುವ ಬಾಡಿಗೆ ಹಣ ಎಷ್ಟು ಬಾಡಿಗೆ ನಿಗಧಿಪಡಿಸುವ ಕುರಿತು ನಿಯಮಗಳು ಇವೆಯೇ ; ಈ ಕಲ್ಯಾಣ ಮಂಟಪಗಳಿಂದ ಸರ್ಕಾರಕ್ಕೆ ಬರುತ್ತಿರುವ ವರಮಾನ ಎಷ್ಟು ; (ವಿವರ ನೀಡುವುದು)

(ಇ) ಕೆಲವು ಕಲ್ಯಾಣ ಮಂಟಪಗಳು ಹೆಚ್ಚಿನ ಬಾಡಿಗೆ ನಿಗದಿಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ಈ ಕಲ್ಯಾಣ ಮಂಟಪಗಳ ವಿರುದ್ಧ ಕೈಗೊಂಡಿರುವ ಕ್ರಮಗಳೇನು ;

(ಈ) ಕಲ್ಯಾಣ ಮಂಟಪಗಳನ್ನು ಮದುವೆ ಸೇರಿದಂತೆ ಇತರೆ ಸಮಾರಂಭಗಳಿಗೆ ಬಾಡಿಗೆಗೆ ನೀಡುವಾಗ ಕೆಲವು ಕಲ್ಯಾಣ ಮಂಟಪಗಳ ಆಡಳಿತ ಮಂಡಳಿಗಳು ಹೂವಿನ ಅಲಂಕಾರ ಸೇರಿದಂತೆ ಸ್ಟೇಜ್ ನಿರ್ಮಾಣ ಕೆಲಸವನ್ನು ತಾವು ಹೇಳಿದ ವ್ಯಕ್ತಿಗಳಿಗೆ ನೀಡಬೇಕೆಂದು ಸೂಚನೆ ನೀಡುತ್ತಿದ್ದು, ಈ ರೀತಿ ಸೂಚನೆ ನೀಡಲು ಅವರಿಗೆ ಅವಕಾಶ ನೀಡಲಾಗಿದೆಯೇ ;(ಹಾಗಿದ್ದಲ್ಲಿ ಆದೇಶದ ಪ್ರತಿ ನೀಡುವುದು)

(ಉ) ಇಲ್ಲದಿದ್ದಲ್ಲಿ, ಇಂತಹ ಕಲ್ಯಾಣ ಮಂಟಪಗಳ ವಿರುದ್ಧ ಕ್ರಮಕೈಗೊಳ್ಳುವುದರ ಜೊತೆಗೆ ಎಲ್ಲಾ ಕಲ್ಯಾಣ ಮಂಟಪಗಳಲ್ಲೂ ಈ ಕುರಿತು ನಾಮಫಲಕ ಅಳವಡಿಸುವಂತೆ ಸೂಚನೆ ನೀಡುವ ಕುರಿತು ಸರ್ಕಾರ ಕ್ರಮ ಕೈಗೊಳ್ಳುವುದೇ ?